ಎಂ. ಎಲ್. ಶಿವಶಂಕರ್*

# ಅಪೂರ್ವ ನರಸಿಂಹಮೂರ್ತಿ ಶಿಲ್ಪಗಳು

ಕುಳಿತಿರುವ ನರಸಿಂಹಮೂರ್ತಿ ದ್ವಿಬಾಹುಗಳನ್ನು ಹೊಂದಿದೆ. ಉತ್ತರಕನ್ನಡ ಜಿಲ್ಲೆಯ ಸಿರಸಿ ತಾಲ್ಲೂಕಿನ ಸನ್ನಳ್ಳಿಯಲ್ಲಿ ಅಶೋಕವನದ ಸಮೀಪ ದೊರೆತಿದೆ.[1] ಪ್ರೊ. ನೀಲಾಂಬರ್ ಹಟ್ಟಿ ದಿನಾಂಕ ೮-೪-೯೪ರಂದು ಈ ಅಪೂರ್ವ ಮೂರ್ತಿಯನ್ನು ಕರ್ನಾಟಕ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಗೆ ಕೊಟ್ಟಿರುತ್ತಾರೆ. ಈ ಮೂರ್ತಿಯ ಅಳತೆ ೬೦ ಸೆಂ.ಮೀ., ೩೨ ಸೆಂ.ಮೀ., ೭ ಸೆಂ.ಮೀ. ಆಗಿದೆ (ಛಾಯಾಚಿತ್ರ ೧, ೨). ಕಾಲ ಸುಮಾರು ಕ್ರಿ.ಶ. ೧೧-೧೨ನೆಯ ಶತಮಾನ. ಶಿರ ಗುಂಗುರು ಕೂದಲಿನಿಂದ ಕೂಡಿದೆ (ಮುಂಭಾಗ ಮತ್ತು ಹಿಂಭಾಗ). ಕೊರಳಲ್ಲಿ ಪದಕ, ಒಂದೆಳೆಯಲ್ಲಿ ಯಜ್ಞೋಪವೀತ, ಕಟಿಬಂಧ, ತೋಳ್ಬಂದಿ, ಮೇಲ್ಭಾಗ ಬೆತ್ತಲೆಯಿದ್ದು, ಸೊಂಟದ ತಳಭಾಗ ಧೋತಿ ಧರಿಸಿದೆ. ಪೀಠಭಾಗ ಪದ್ಮಗಳಿಂದ ಅಲಂಕೃತವಾಗಿದೆ.

ನರಸಿಂಹ ಮೂರ್ತಿಗಳು ಮಧುಕೇಶ್ವರ ದೇವಾಲಯ, ಬನವಾಸಿ (ಉತ್ತರ ಕನ್ನಡ ಜಿಲ್ಲೆ), ಹಲಸಿಯ ದೇವಾಲಯ (ಬೆಳಗಾವಿ ಜಿಲ್ಲೆ), ಕೂಡ್ಲಿ ನರಸಿಂಹ ದೇವಾಲಯಗಳಲ್ಲಿ (ಶಿವಮೊಗ್ಗ ಜಿಲ್ಲೆ) ದೊರೆತಿವೆ.

ಕುಣಿಗಲ್ ಕೆರೆಯ ಹೂಳು ತೆಗೆಯುವಾಗ ನರಸಿಂಹಸ್ವಾಮಿ ಶಿಲಾಮೂರ್ತಿ ದೊರೆತಿದೆ. ಈ ಮೂರ್ತಿ ಸಮಭಂಗದಲ್ಲಿದ್ದು, ಚತುರ್ಭುಜದಿಂದ ಕೂಡಿದ್ದು, ಮುಂಭಾಗದ ಬಲಗೈಗಳು ಮುರಿದಿವೆ. ಎಡ ಮೇಲ್ಭಾಗದ ಕೈ ಶಂಖ, ಎಡ ಕೆಳಗಿನ ಕೈ ಗದೆಯನ್ನು ಹಿಡಿದಿದೆ. ಬಲಕಾಲಿನ ಬಳಿ ನಿಂತಿರುವ ಮೂರ್ತಿ (ಪ್ರಹ್ಲಾದ) ಭಕ್ತಿಪೂರ್ವಕನಾಗಿ ನಿಂತಿದ್ದಾನೆ. ಈ ಮೂರ್ತಿ ಯಜ್ಞೋಪವೀತ, ಕಂಠೀಹಾರದಿಂದ ಅಲಂಕೃತಗೊಂಡಿದೆ. ಈ ಮೂರ್ತಿ ಎತ್ತರ ೧೧೭ ಸೆಂ.ಮೀ. ಆಗಲ ೪೪ ಸೆಂ.ಮೀ. ಇರುತ್ತದೆ. ಕಾಲ ಸುಮಾರು ೧೫ನೇ ಶತಮಾನ. ಈಗ ಈ ಮೂರ್ತಿ ಧರ್ಮಸ್ಥಳದ ಮಂಜೂಷಾ ವಸ್ತು ಸಂಗ್ರಹಾಲಯದಲ್ಲಿರುತ್ತದೆ. (ಛಾಯಾಚಿತ್ರ ೩).

---

* ಉಪ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು-೫೭೦ ೦೦೧

1 ಶ್ರೀ ಮಾಧವ ಎನ್. ಕಟ್ಟಿ, ನಿರ್ದೇಶಕರು, ಭಾರತೀಯ ಶಾಸನ ನಿರ್ದೇಶನಾಲಯ, ಮೈಸೂರು ಇವರು ಅಶೋಕವನ ಯುದ್ಧ ಭೂಮಿ ಇರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ.